ಸಿ. ನಾಗಭೂಷಣ

# ಇತಿಹಾಸದ ಅಧ್ಯಯನಕ್ಕೆ ಶಾಸನ-ಕಾವ್ಯ-ಸ್ಥಳಪುರಾಣಗಳ ಸಮನ್ವಯ

ಶಾಸನ-ಕಾವ್ಯ-ಪುರಾಣಗಳಲ್ಲಿ ವ್ಯತ್ಯಾಸವಿದ್ದರೂ, ಇತಿಹಾಸದ ಅಧ್ಯಯನಕ್ಕೆ ಒಂದಕ್ಕೊಂದು ಪರಸ್ಪರ ಪೂರಕಗಳಾಗಿವೆಯೇ ಹೊರತು ವಿರುದ್ಧಗಳಾಗಿಲ್ಲ ಎಂಬುದನ್ನು ಏಕಾಂತ ರಾಮಯ್ಯ ಮತ್ತು ಆದಯ್ಯರನ್ನು ನಿದರ್ಶನವಾಗಿಟ್ಟುಕೊಂಡು ಇಲ್ಲಿ ವಿವೇಚಿಸಲಾಗಿದೆ. ಒಂದರಲ್ಲಿನ ಕೊರತೆಯನ್ನು ನಾವು ಮತ್ತೊಂದರಿಂದ ತುಂಬಿಕೊಳ್ಳಬಹುದು ಎಂಬುದನ್ನು ಇಲ್ಲಿ ಸೂಚಿಸಲಾಗಿದೆ.

ಏಕಾಂತರಾಮಯ್ಯನನ್ನು ಕುರಿತು ಅಬ್ಬಲೂರು ಶಾಸನ, ಹರಿಹರನ ಏಕಾಂತ ರಾಮಿತಂದೆಗಳ ರಗಳೆ, ಶಾಂತ ನಿರಂಜನನ ಅಬ್ಬಲೂರು ಚರಿತೆ ಪುರಾಣಗಳು ಆತನ ಸಮಗ್ರ ಚಿತ್ರಣಕ್ಕೆ ಪರಸ್ಪರ ನೆರವಾಗಿವೆ. ಏಕಾಂತ ರಾಮಯ್ಯನಿಗೆ ಜೈನರ ವಿರುದ್ಧ ಪ್ರಾಣವನ್ನಾದರೂ ಒಡ್ಡಿ ಶೈವಧರ್ಮವನ್ನು ಉದ್ಧರಿಸು ಎಂಬ ಶಾಸನದಲ್ಲಿ ಬಂದಿರುವ ಹೇಳಿಕೆಗಿಂತ ಅಬ್ಬಲೂರು ಚರಿತೆ(ಪುರಾಣ)ದಲ್ಲಿ ಬಂದಿರುವ ಹೇಳಿಕೆಯು ಇತಿಹಾಸಕ್ಕೆ ಸಮೀಪವಾಗಿದೆ ಎಂದೆನಿಸುತ್ತದೆ.

ಶಾಸನ ಮತ್ತು ಪುರಾಣಗಳಲ್ಲಿ ವ್ಯಕ್ತವಾಗಿರುವ ಹೇಳಿಕೆಗಳಲ್ಲಿ, ಶಾಸನದಲ್ಲಿನ ಹೇಳಿಕೆ ದಂತಕಥೆಯಂತೆ ಕಂಡುಬಂದರೆ, ಪುರಾಣದಲ್ಲಿ ಬಂದಿರುವ ಹೇಳಿಕೆ ಇತಿಹಾಸದ ಸನ್ನಿಹದಲ್ಲಿದೆ ಎಂದೆನಿಸುತ್ತದೆ,

ಏಕಾಂತ ರಾಮಯ್ಯನು ಬ್ರಹ್ಮೇಶದೇವಾಲಯದಲ್ಲಿ ಜೈನರ ವಿರುದ್ಧ ಪಣ ತೊಡಲು ಪ್ರೇರಕವಾದ ಕಾರಣ ಗಳನ್ನು ಶಾಸನ_ಕಾವ್ಯ ಸ್ಥಳಪುರಾಣಗಳು ಬೇರೆ ಬೇರೆ ರೀತಿಯಲ್ಲಿ ಪ್ರತಿಪಾದಿಸಿದ್ದರೂ ಅವುಗಳ ಮೂಲ ಉದ್ದೇಶ್ಯ ಒಂದೇ ಎಂಬುದನ್ನು ನಾವು ಮರೆಯು ವಂತಿಲ್ಲ.

ಏಕಾಂತದ ರಾಮಯ್ಯನು ಜೈನರ ವಿರುದ್ಧ ಪಣತೊಟ್ಟಾಗ, ಜೈನ ಪ್ರಮುಖರು ಖುದ್ದಾಗಿ ಬಂದು ಪಣದ ವ್ರತವನ್ನು ಒಪ್ಪಿ ಅದರಂತೆ ನಡೆಯುವುದಾಗಿ ಹಠತೊಟ್ಟರು. ಆ ಜೈನ ಪ್ರಮುಖರ ಹೆಸರುಗಳು ಶಾಸನ ಕಾವ್ಯಗಳಲ್ಲಿ ಕಂಡುಬಾರದೆ, ಅಬ್ಬಲೂರು ಚರಿತೆಯಲ್ಲಿ ಮಾತ್ರ ಕಂಡುಬರುತ್ತವೆ. ಅವರುಗಳ ಹೆಸರುಗಳು ಕ್ರಮವಾಗಿ ಪರಮಹಂಸ, ಪಾಯಣ್ಣ, ಪದ್ಮಣ್ಣ, ಹೂವಣ್ಣ, ತೀರ್ಥಣ್ಣ ಇತ್ಯಾದಿ. ಅಗ್ಘವಣಿಯ ಹೊನ್ನಿತಂದೆ ರಾಮಯ್ಯನ ರುಂಡವನ್ನು ಹೊತ್ತುಕೊಂಡು ಶೈವಕ್ಷೇತ್ರಗಳನ್ನು ಸಂದರ್ಶಿಸಿ ನಂತರ ಅಬ್ಬಲೂರಿಗೆ ಬಂದ ಹೆಚ್ಚಿನ ವಿವರ ಶಾಸನಕ್ಕಿಂತ ಹೆಚ್ಚಾಗಿ ಕಾವ್ಯ ಮತ್ತು ಪುರಾಣಗಳಲ್ಲಿ ಕಂಡುಬರುತ್ತದೆ. ಆ ಎರಡು ಕೃತಿಗಳು ಆ ಶೈವಕ್ಷೇತ್ರಗಳ ಹೆಸರನ್ನು ಉಲ್ಲೇಖಿಸಿದೆ. ಅವುಗಳೆಂದರೆ "ಅಣ್ಣಿಗೆರೆಯ ಅಮೃತ ನಾಥ, ಕೆಂಭಾವಿಭೋಗನಾಥ, ಕಪ್ಪಡಿಯ ಸಂಗಮೇಶ್ವರ, ಸೊನ್ನಲಿಗೆ ಸಿದ್ಧರಾಮ(?), ಆವುಂಡದ ನಾಗನಾಥ, ಹಂಪೆಯ ವಿರೂಪಾಕ್ಷ, ಹುಲಿಗೆರೆ ಸೋಮನಾಥ. ಅಂದಿಗೆ ಆ ಏಳು ಸ್ಥಳಗಳು ಶೈವಕ್ಷೇತ್ರ ಗಳಾಗಿದ್ದವು ಎಂಬುದಕ್ಕೆ ಶಾಸನಕ್ಕಿಂತ ಕಾವ್ಯ ಪುರಾಣ ಗಳಲ್ಲಿ ಹೆಚ್ಚಿನ ಆಧಾರ ದೊರೆಯುತ್ತದೆ.

ಏಕಾಂತ ರಾಮಯ್ಯನು ತನ್ನ ರುಂಡವನ್ನು ಖಡ್ಗ

ದಿಂದ ಹುಲ್ಲಕಟ್ಟನರಿದಂತೆ ಅತಿ ಸುಲಭದಿಂದ ಇರಿದು ಕೊಂಡನೆಂದು ಶಾಸನದಲ್ಲಿ ಹೇಳಿದರೆ, ಅಬ್ಬಲೂರು ಚರಿತೆಯಲ್ಲಿ ರಾಮಯ್ಯನು 'ಗಂಡಗತ್ತರಿ'ಯನ್ನು ಕಟ್ಟಿಸಿ ಕೊಂಡು ಕಾಲು ಚಾಚಿದ ರುಂಡ ಕತ್ತರಿಸಿ ಬಿದ್ದಿತೆಂದು ಹೇಳಲಾಗಿದೆ. ಪುರಾಣದಲ್ಲಿ ವ್ಯಕ್ತವಾಗಿರುವ ವಿಶೇಷ ಆಯುಧ ಪ್ರಕಾರವಾದ ಗಂಡಗತ್ತರಿಯು (ವೀರ) ಶರಣರು ಬಲಿ ಹೋಗಲು ಬಳಸುತ್ತಿದ್ದರು ಎಂಬುದರ ಕುರುಹು ಆಗಿದೆ.

ಚಿಕ್ಕೇಶ ಗುರುವಿನ ಪ್ರಸ್ತಾಪ ಅಬ್ಬಲೂರು ಚರಿತೆ, ವೀರಶೈವಾಮೃತ ಮಹಾಪುರಾಣ, ಸಿದ್ದೇಶ್ವರ ಪುರಾಣದಲ್ಲಿ ವ್ಯಕ್ತವಾಗಿದೆ. ಅಂತರವಳ್ಳಿಯಲ್ಲಿ ಈತನ ವಿಗ್ರಹವಿದೆ. ಅಬ್ಬಲೂರು ಚರಿತದಲ್ಲಿ ಏಕಾಂತ ರಾಮಯ್ಯನು ತನ್ನ ಘನಕಾರ್ಯದಲ್ಲಿ ಯಶಸ್ವಿ ಯಾಗಲು ರಾಮಯ್ಯನ ಶಿರವನ್ನು ಶೈವಕ್ಷೇತ್ರಗಳಲ್ಲಿ ಹೊತ್ತುತಂದ ಹೊನ್ನಿತಂದೆಗಳು ಅಂತರವಳ್ಳಿಯಲ್ಲಿದ್ದ ಪಂಚಬ್ರಹ್ಮ ಮಠದ ಚಿಕ್ಕೇಶಯತಿಯನ್ನು ಕಾಣುತ್ತಾರೆ. ರಾಮಯ್ಯನ ಪಣದ ವಿವರವನ್ನು ತಿಳಿಸಿ, ಈದಿನ ಕೊನೆಯ ದಿನ, ಅಸ್ತಂಗತನಾಗುವ ಸೂರ್ಯನನ್ನು ತಡೆ ಹಿಡಿದು ಈ ಕಾರ್ಯದಲ್ಲಿ ರಾಮಯ್ಯನು ಜಯಶೀಲ ನಾಗುವಂತೆ ಮಾಡಬೇಕೆಂದು ಬೇಡಿಕೊಂಡರು. ಚಿಕ್ಕೇಶ ಗುರುವು ಸೂರ್ಯನನ್ನು ಕರೆದು ಮೂಜು ಜಾವ ತಡ ಮಾಡಿ ಮುಳುಗಲು ಆಜ್ಞೆ ನೀಡಿದ. ರಾಮಯ್ಯ ತನ್ನ ಕಾರ್ಯದಲ್ಲಿ ಜಯಶೀಲನಾದ. ಜನತೆ ಚಿಕ್ಕೇಶನನ್ನು ಮೂಜುಜಾವಿದೇವ ಎಂದು ಕೀರ್ತಿಸಿದರು ಎಂಬ ವಿವರ ಬರುತ್ತದೆ. ಬಿಜ್ಜಳಿನಿಂದ ಏಕಾಂತರಾಮಯ್ಯನು ದೂಪದಹಳ್ಳಿ, ಅಬ್ಬಲೂರು, ಭೋಗಾವಿ, ದೀಪದಹಳ್ಳಿ, ನೂಲ್ಗೇರಿಗಳನ್ನು ದತ್ತಿ ಪಡೆದಂತೆ ಚಿಕ್ಕೇಶಗುರುವು ಬಿಜ್ಜಳ ಭೂಪನಿಂದ ಅಂತರವಳ್ಳಿ, ಆಲದಕಟ್ಟೆ, ಹಲಿಗೇರಿ, ಸುಂಕಾಪುರ, ಮಾಗೋಡು, ನಿಟ್ಟೂರು ಪಡೆದನೆಂದು ಈ ಪುರಾಣದ ವಿವರದಲ್ಲಿ ಇದೆ. ಈ ಚಿಕ್ಕೇಶ ಅಥವಾ ಮೂಜುಜಾವಿದೇವನ ಉಲ್ಲೇಖ ಹಿರೇಮಂಗಲಗೇರಿ ಶಾಸನ (ಕ್ರಿ.ಶ. ೧೦೪೫) ರಟ್ಟಿಹಳ್ಳಿಯ ಶಾಸನ (ಕ್ರಿ.ಶ. ೧೧೭೪) ರಟ್ಟಿಹಳ್ಳಿಯ ಮತ್ತೊಂದು ಶಾಸನ (ಕ್ರಿ.ಶ. ೧೨೩೮)ಗಳಲ್ಲಿದೆ. ಈ ಮೂರರಲ್ಲಿಯೂ ಉಲ್ಲೇಖಗೊಂಡಿರುವ 'ಮೂರು ಜಾವುದಯ್ಯನು' ಒಬ್ಬನಾಗಿರದೆ ಅದೇ ಹೆಸರುಳ್ಳ ಮೂರು ಜನರಿದ್ದಿರ ಬೇಕು. ಏಕಾಂತ ರಾಮಯ್ಯನ ಕಾಲದಲ್ಲಿ ಬಂದಿರುವ ಮೊಜುಜಾವುದ ದೇವನು ರಟ್ಟಿಹಳ್ಳಿಯ ಕ್ರಿ.ಶ. ೧೧೭೪ರ ಶಾಸನೋಕ್ತನಿರಬಹುದೆಂದು ತೋರುತ್ತದೆ. ಪುರಾಣದಲ್ಲಿ ವ್ಯಕ್ತವಾಗಿರುವ ಚಿಕ್ಕೇಶ ಅಥವಾ ಮೊಜುಜಾವುದ ದೇವನು ಐತಿಹಾಸಿಕ ವ್ಯಕ್ತಿ ಎಂಬುದನ್ನು ಪೂರಕ ಶಾಸನಗಳಿಂದ ಸಮರ್ಥಿಸಬಹುದಾಗಿದೆ.

ಏಕಾಂತ ರಾಮಯ್ಯನ ಸಮಕಾಲೀನನೇ ಆದ ಆದಯ್ಯನನ್ನು ಕುರಿತು ಶಾಸನ ಕಾವ್ಯ ಸ್ಥಳಪುರಾಣಗಳ ಸಮನ್ವಯವು ಪರಿಪೂರ್ಣವಾದ ಅಧ್ಯಯನಕ್ಕೆ ನೆರ ವಾಗಿರುವುದನ್ನು ಇಲ್ಲಿ ಗುರುತಿಸಲಾಗಿದೆ.

ಪುಲಿಗೆಱೆಯಲ್ಲಿ ಸೌರಾಷ್ಟ್ರದ ಸೋಮೇಶ್ವರನನ್ನು ಆದಯ್ಯನು ತಂದು ಪ್ರತಿಷ್ಠಾಪಿಸಿದ ವಿವರಗಳಿಗೆ ಹರಿಹರನ ಆದಯ್ಯನ ರಗಳೆ ಕೃತಿಯನ್ನನುಸರಿಸಿ ರಚಿತ ವಾದ ಕಾವ್ಯಗಳನ್ನು ಹಾಗೂ ಪಾಲ್ಕುರಿಕೆ ಸೋಮ ನಾಥನ (ತೆಲುಗು) ಬಸವಪುರಾಣದ ಪರಂಪರೆಯಲ್ಲಿ ಕನ್ನಡದಲ್ಲಿ ರಚಿತವಾದ ವೀರಶೈವ ಪುರಾಣಗಳನ್ನು ಅವಲಂಬಿಸಬೇಕಾಗಿದೆ. ಶಾಸನಗಳು ಆದಯ್ಯನನ್ನು ಕುರಿತು ಅಷ್ಟಾಗಿ ಕಂಡುಬರುತ್ತಿಲ್ಲವಾದ್ದರಿಂದ ಆನುಷಂಗಿಕ ಸಾಮಾಗ್ರಿಗಳಿಂದ ಕಾವ್ಯ ಪುರಾಣಗಳಲ್ಲಿನ ವಿವರಗಳಲ್ಲಿ ಆದಯ್ಯನ ಚರಿತ್ರೆಗೆ ಸಂಬಂಧಿಸಿದ ಎಳೆ ಗಳನ್ನು ಬಿಡಿಸಬೇಕಾಗಿದೆ. ಪುಲಿಗೆಱೆಯಲ್ಲಿ ದೊರೆಯುವ ಶಾಸನಗಳಲ್ಲಿ ಆದಯ್ಯನು ತಂದು ಪ್ರತಿಷ್ಠಾಪಿಸಿದ ಸೋಮನಾಥನ ವಿವರದ ಬಗೆಗೆ ಉಲ್ಲೇಖವಿರದೆ ಕೇವಲ ಸೋಮೇಶ್ವರ ದೇವಾಲಯದ ಹೆಸರು ಮತ್ತು ಸ್ಥಾನಾ ಚಾರ್ಯರ ಬಗೆಗೆ ಮಾತ್ರ ಉಲ್ಲೇಖವಿದೆ.[1] ಬಳ್ಳಿಗಾವೆಯ ಕ್ರಿ.ಶ. ೧೪೯೦ರ ಶಾಸನದಲ್ಲಿ ಪುಲಿಗೆಱೆ ಸೋಮೇಶ್ವರ ದೇವಾಲಯದ ಉಲ್ಲೇಖವಿದೆ.[2] ಈ ಶಾಸನದಲ್ಲಿನ

1 Three Inscriptions of Puligere : *E.I.*, XVI, p. 23
2 *EC.*, VII, Sk 114

ಉಲ್ಲೇಖಿದ ಪ್ರಕಾರ ಆದಯ್ಯನು ಕ್ರಿ.ಶ. ೧೦೯೬ಕ್ಕಿಂತ ಪೂರ್ವದಲ್ಲಿಯೇ ಸೋಮೇಶ್ವರನನ್ನು ತಂದು ಪ್ರತಿಷ್ಠಾಪಿಸಿದ್ದಾನೆಂದು ಊಹಿಸಬಹುದಾಗಿದೆ. ಅಂದರೆ ಪುಲಿಗೆರೆಯಲ್ಲಿ ಸೋಮನಾಥನ ಪ್ರತಿಷ್ಠಾಪನೆಯ ಕಾಲ ಹನ್ನೊಂದನೇ ಶತಮಾನದ ಅಂತ್ಯಭಾಗ ಎಂದು ನಿರ್ಧರಿಸಬಹುದಾಗಿದೆ.

ಆದಯ್ಯನನ್ನು ಕುರಿತ ಕಾವ್ಯ ಮತ್ತು ಪುರಾಣಗಳಲ್ಲಿ ಸೋಮೇಶ್ವರನ ಪ್ರತಿಷ್ಠಾಪನೆಯ ಪೂರ್ಣವಿವರ ಮಾತ್ರ ಇದ್ದು, ಪ್ರತಿಷ್ಠಾಪನೆಯ ಕಾಲದ ಬಗೆಗೆ ಶಾಸನಗಳಲ್ಲಿ ದೊರೆಯುವ ಪೂರಕ ಸಂಗತಿಗಳಿಂದ ತಿಳಿಯಬಹುದಾಗಿದೆ.

ಸೌರಾಷ್ಟ್ರದಿಂದ ವ್ಯಾಪಾರ ನಿಮಿತ್ತ ಬಂದ ಆದಯ್ಯನು ಪುಲಿಗೆರೆಯ ಹೋಜೇಶ್ವರ ದೇವಾಲಯದಲ್ಲಿ ಇಳಿದುಕೊಂಡಿದ್ದನೆಂದು ಹರಿಹರನ ಆದಯ್ಯನ ರಗಳೆ ರಾಘವಾಂಕ ಮತ್ತು ಸಿದ್ಧನಂಜೇಶಾದಿ ಕವಿಗಳ ಕಾವ್ಯಗಳಲ್ಲಿ ಉಲ್ಲೇಖವಿದೆ. ಆದಯ್ಯನು ಪುಲಿಗೆರೆಯ ಜೈನ ಪಾರಿಸಸೆಟ್ಟಿಯ ಮಗಳು ಪದ್ಮಾವತಿಯನ್ನು ವರಿಸುವ ಮುನ್ನ ಆಕೆಗೆ ಹೋಜೇಶ್ವರ ದೇವಾಲಯದ ಸ್ಥಾನಾಚಾರ್ಯರಿಂದ ಶೈವದೀಕ್ಷೆಯನ್ನು ಕೊಡಿಸಿದ ಎಂದೂ ಹೇಳುತ್ತವೆ. ಆ ಕಾಲಕ್ಕೆ ಹೋಜೇಶ್ವರ ದೇವಾಲಯವು ಶೈವದೇವಾಲಯವಾಗಿತ್ತು ಎಂಬುದು ಈ ಕಾವ್ಯಗಳಿಂದ ತಿಳಿದು ಬರುತ್ತದೆ. ಈ ದೇವಾಲಯವು ಇಂದಿಗೂ ಪುಲಿಗೆರೆಯಲ್ಲಿದ್ದು ಜನರು ಅದನ್ನು ಇಂದು ವಾಚೇಶ್ವರ ದೇವಾಲಯ ಎಂದು ಕರೆಯುತ್ತಾರೆ. ಈ ದೇವಾಲಯವನ್ನು ಕುರಿತು ಶಾಸನಗಳಲ್ಲಿ ಹೆಚ್ಚಿನ ಉಲ್ಲೇಖ ದೊರೆಯದೆ ಇದ್ದರೂ ಕ್ರಿ.ಶ. ೬೦೦ರಲ್ಲಿನ ಶಾಸನದಲ್ಲಿ 'ವಾಯುವ್ಯ ಹೋಜೇಶ್ವರ ಕ್ಷೇತ್ರಂ' ಎಂದೂ ಕ್ರಿ.ಶ. ೧೧೬೬ರ ಶಾಸನದಲ್ಲಿ 'ತೆಂಕಲ್ ಹೋಜೇಶ್ವರ ಭೂಮಿ' ಎಂಬ ಉಲ್ಲೇಖಗಳಿವೆ.[3] ಶಾಸನಗಳಲ್ಲಿ ಹೋಜೇಶ್ವರ ಎಂಬ ಹೆಸರಿನಲ್ಲಿ ಉಲ್ಲೇಖವಾಗಿದ್ದು ಹರಿಹರ ರಾಘವಾಂಕರ ಕಾವ್ಯಗಳಲ್ಲಿ ಹೋಜೇಶ್ವರ ದೇವಾಲಯ ಎಂಬುದು ಜನಸಾಮಾನ್ಯರ ಬಾಯಲ್ಲಿ ವಾಚೇಶ್ವರ ದೇವಾಲಯ ಎಂಬ ಹೆಸರಾಗಿದೆ.

ಕಾವ್ಯ ಪುರಾಣಗಳಲ್ಲಿ ವ್ಯಕ್ತವಾಗಿರುವ ಆದಯ್ಯನು ಸೌರಾಷ್ಟ್ರದ ಸೋಮೇಶ್ವರನನ್ನು ತಂದು ಸ್ಥಾಪಿಸುವ ಮೊದಲು ಆ ದೇವಾಲಯವು ಸುರಹೊನ್ನೆ ಎಂಬ ಹೆಸರಿನ ಜೈನ ಬಸದಿಯಾಗಿತ್ತು ಎಂಬ ಹೇಳಿಕೆಯನ್ನು ಖಚಿತವಾಗಿ ಬೆಂಬಲಿಸುವ ಆಧಾರಗಳು ಶಾಸನಗಳಲ್ಲಿ ದೊರೆಯದೆ ಇದ್ದರೂ ಪೂರಕ ಅಂಶಗಳು ದೊರೆತಿವೆ.

ಆದಯ್ಯನು ಸುರಹೊನ್ನೆ ಬಸದಿಯಲ್ಲಿ ಶಿವನನ್ನು ಪ್ರತಿಷ್ಠಾಪಿಸಿ ಅದನ್ನು ಶಿವಾಲಯವನ್ನಾಗಿ ಪರಿವರ್ತಿಸಿದ ನಂತರದ ಕಾಲದಲ್ಲಿ ಈ ಶಿವಾಲಯದ ಅರ್ಚಕರಿಗೂ ಪುಲಿಗೆರೆಯಲ್ಲಿದ್ದ ಇತರೆ ಜೈನ ಬಸದಿಯ ಆಚಾರ್ಯರಿಗೂ ಹಲವು ಕಾರಣಕ್ಕಾಗಿ ಒಳ ಜಗಳಗಳಾಗಿದ್ದನ್ನು ಶಾಸನಗಳು ಶ್ರುತ ಪಡಿಸುತ್ತವೆ. ಶೈವ ಮತ್ತು ಜೈನ ಆಲಯಗಳ ಅರ್ಚಕರ ನಡುವಿನ ಆಂತರಿಕ ಜಗಳಕ್ಕೆ ಹಿನ್ನಲೆ ಬಹುಶಃ (ಕಾವ್ಯಪುರಾಣಗಳಲ್ಲಿ ಉಲ್ಲೇಖವಾಗಿರುವ) ಪೂರ್ವದ ಆದಯ್ಯ ಮತ್ತು ಜೈನರ ನಡುವಿನ ವಾದ_ಪ್ರತಿವಾದ ಹೋರಾಟವೇ ಕಾರಣವಿರಬೇಕು ಎಂದು ಊಹಿಸಲು ಕ್ರಿ.ಶ. ೧೪೧೨ರ.[4] ಮತ್ತು ಇನ್ನೊಂದು ಶಾಸನವು[5] ನೆರವಾಗುತ್ತವೆ.

ಪುಲಿಗೆರೆಯ ಸೋಮೇಶನ ಪ್ರತಿಷ್ಠಾಪನೆ, ಪ್ರತಿಷ್ಠಾಪಿಸಿದ ಆದಯ್ಯನ ಚರಿತ್ರೆ, ಅದರ ಸ್ಥಾನಾಚಾರ್ಯರ ವಿವರ ಮೊದಲಾದವುಗಳನ್ನು ಶಾಸನಗಳಿಂದಾಗಲಿ ಆ ಕಾಲದಲ್ಲಿ ಅಥವಾ ಆ ಕಾಲದ ನಂತರ ದೊರೆಯುವ ಕೇವಲ ಕೃತಿಗಳಿಂದಾಗಲಿ ಪೂರ್ಣ ಪ್ರಮಾಣದಲ್ಲಿ ಅರಿಯಲು ಸಾಧ್ಯವಾಗುವುದಿಲ್ಲ. ಇವೆರಡರ ಜೊತೆಗೆ ದೊರೆಯುವ ಪುಲಿಗೆರೆಯ ಸ್ಥಳ ಪುರಾಣ ಈ ಮೂರರಲ್ಲಿಯೂ ದೊರೆಯು ಮಾಹಿತಿಗಳನ್ನು ಪೂರಕವಾಗಿ ಬಳಸಿಕೊಂಡಾಗ ಮೇಲೆ ತಿಳಿಸಿದ ವಿಷಯದ ಬಗೆಗೆ ಸಮಗ್ರ ಚಿತ್ರಣವನ್ನು ರೂಪಿಸಬಹುದು.

---

3 ಎಂ.ಬಿ. ಭೋಯಿ : 'ಲಕ್ಷ್ಮೇಶ್ವರದ ಶಾಸನಗಳು,' ಪುಲಿಗೆರೆ, ಪು. ೧೫

4 *S.I.I.*, XX, pp. 282-284, 383

5 *Ibid.*